# ಪಾಠ ಯೋಜನೆಗಳು

- **ರಮೇಶ್ ಎಸ್ ರಾಥೋಡ್**

ಮಕ್ಕಳಿಗೆ ತರಗತಿಯಲ್ಲಿ ನಿಜವಾದ ಕಲಿಕೆ ಆಗಬೇಕಾದರೆ, ಶಿಕ್ಷಕರ ಕಡೆಯಿಂದ ಉತ್ತಮ ಸಿದ್ಧತೆ ಅತ್ಯಗತ್ಯ. ಇದಕ್ಕೆ ಯಾವ ರೀತಿಯ ತಯಾರಿ ಅಗತ್ಯ ಎಂದು ಶಿಕ್ಷಕರಾದ ನಾವು ತಿಳಿದಿರಬೇಕು. 'ಮಗುವಿಗೆ ಹೇಗೆ ಕಲಿಸುವುದು?' ಎಂದು ಯೋಚಿಸುವುದಕ್ಕಿಂತ 'ಮಗು ಹೇಗೆ ಕಲಿಯುತ್ತದೆ?' ಎಂಬ ನಿಟ್ಟಿನಲ್ಲಿ ಯೋಚಿಸುವುದು ಯಾವಾಗಲೂ ಉತ್ತಮ, ಏಕೆಂದರೆ ಮಗು ಸ್ವತಃ ತಾನಾಗಿಯೇ ಕಲಿಯಲು ಸಿದ್ಧವಾದಾಗ ಮಾತ್ರ ಕಲಿಯುತ್ತದೆ. ಕಲಿಕೆಗೆ ಕೊನೆಯಿಲ್ಲ, ಶಿಕ್ಷಣ ನಿರಂತರ ಪ್ರಕ್ರಿಯೆ. ಶಾಲೆಯಲ್ಲಿ ಕಲಿಯುವುದು ಒಂದು ಹಂತವಾದರೆ, ಅದನ್ನೇ ಜೀವನದಲ್ಲಿ ಅಳವಡಿಸಿಕೊಳ್ಳುವುದು ಇನ್ನೊಂದು ಹಂತ. ಬದುಕಿನಲ್ಲಿ ಮುಂದೆ ಸಾಗಿದಂತೆ ಜೀವನವು ಪ್ರತಿಯೊಬ್ಬ ವ್ಯಕ್ತಿಗೂ ಒಂದಲ್ಲ ಒಂದು ಪಾಠವನ್ನು ಕಲಿಸುತ್ತಲೇ ಇರುತ್ತದೆ. ನಾವು ಶಾಲೆಯಲ್ಲಿ ಮಗುವಿಗೆ ನೀಡುವ ಶಿಕ್ಷಣವು ಅವನ/ಅವಳ ಭವಿಷ್ಯದ ಜೀವನದ ಅಡಿಪಾಯವಾಗಿರಬೇಕು, ಅವರ ಬದುಕು ಶಾಲೆಯಲ್ಲಿ ಹಾಕಿದ ಬುನಾದಿಗೆ ಅನುಗುಣವಾಗಿ ಅರಳುತ್ತದೆ. ಈ ಸಂದರ್ಭದಲ್ಲಿ, ಮಗುವನ್ನು ಕಲಿಯುವಿಕೆಯ ಕ್ರಿಯೆಗೆ ಸಿದ್ಧಪಡಿಸುವಲ್ಲಿ ನಮ್ಮ ಪಾತ್ರ ಏನು ಎಂಬುದನ್ನು ಮೊದಲೇ ನಿರ್ಧರಿಸುವುದು, ಮತ್ತು ನಾವು ಬಳಸಿಕೊಳ್ಳಬಹುದಾದ ಚಟುವಟಿಕೆಗಳು ಮತ್ತು ಸಂಪನ್ಮೂಲಗಳು ಕಲಿಯುವಿಕೆಯ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳಲು ಅಗತ್ಯವಿರುವ ಮೂಲಧಾತುಗಳಾಗಿವೆ. ಇದನ್ನು ಸಾಧಿಸುವ ನಿಟ್ಟಿನಲ್ಲಿ, ಸಮರ್ಪಕ ಪಾಠ ಯೋಜನೆಯನ್ನು ಸಿದ್ಧಪಡಿಸುವುದು ಅತ್ಯಂತ ಪ್ರಮುಖ ಹಂತಗಳಲ್ಲಿ ಒಂದಾಗಿದೆ.

ಪಾಠಯೋಜನೆಯನ್ನು ಸಿದ್ಧಪಡಿಸುವ ಮೊದಲು, ನಾವು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿದೆ.

1. ಮಗು ಏನು ಕಲಿಯಬೇಕು? (ಪರಿಕಲ್ಪನೆ / ಥೀಮ್)
2. ಈ ವಿಷಯವನ್ನು ಏಕೆ ಕಲಿಯಬೇಕು? (ಉದ್ದೇಶ)
3. ಮಗು ಹೇಗೆ ಕಲಿಯುತ್ತದೆ? (ಚಟುವಟಿಕೆಗಳು)
4. ಮಗುವಿನ ಕಲಿಕೆಯ ಮಟ್ಟವನ್ನು ನಾನು ಹೇಗೆ ನಿರ್ಣಯಿಸಬಹುದು? (ಮೌಲ್ಯಮಾಪನ)
5. ಅದರಲ್ಲಿ ನನ್ನ ಪಾತ್ರವೇನು?
6. ಬಳಸಬಹುದಾದ ಸಂಪನ್ಮೂಲಗಳು ಯಾವುವು?

ಬೋಧನೆ ಮಾಡುವಾಗ ಶಿಕ್ಷಕರು ಪ್ರತಿಯೊಬ್ಬ ವಿದ್ಯಾರ್ಥಿಯ ಕಡೆಗೂ ವೈಯಕ್ತಿಕ ಗಮನ ನೀಡಬೇಕು ಎಂಬುದರ ತಾತ್ಪರ್ಯ ನಾವು ಕೇವಲ ಬೋಧನೆಯಲ್ಲಿ ಪರಿಣತರಾಗಿದ್ದರೆ ಮಾತ್ರ ಸಾಕಾಗುವುದಿಲ್ಲ, ಅದರೊಂದಿಗೆ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳ ಅಗತ್ಯಗಳ ಬಗ್ಗೆಯೂ ನಾವು ಹೆಚ್ಚು ಸಂವೇದನಾಶೀಲರಾಗಿರಬೇಕು ಎಂಬುದಾಗಿದೆ. ನಾವು ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಸಾಮರ್ಥ್ಯವನ್ನೂ ಹೊಂದಿರಬೇಕು, ಇದರಿಂದ ಅವರು ಇತರ ವಿದ್ಯಾರ್ಥಿಗಳು ಕಲಿಯುವ ವೇಗದಲ್ಲಿಯೇ ಶಾಲಾ ಪಠ್ಯಗಳನ್ನು ಗ್ರಹಿಸಲು, ಕಲಿಯಲು ಸಮರ್ಥರಾಗುತ್ತಾರೆ. ಅವರಿಗೆ ಕಲಿಕೆಯಲ್ಲಿ ಆಸಕ್ತಿ ಮೂಡಿಸಲು ನಾವು ನೂತನ ಚಟುವಟಿಕೆಗಳು ಮತ್ತು ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಲು ಸಮರ್ಥರಾಗಿರಬೇಕು. ಶಿಕ್ಷಕರು ಸಿದ್ಧಪಡಿಸಿದ ಪಾಠ ಯೋಜನೆಯು ತರಗತಿಯ ಎಲ್ಲ ವಿದ್ಯಾರ್ಥಿಗಳಿಗೆ ಅನ್ವಯಿಸುವ ಸಾಮಾನ್ಯ ಪಾಠ ಯೋಜನೆಯಾಗಿರಬಾರದು, ಹೊರತಾಗಿ ಪ್ರತಿಮಗುವಿನ ಕಲಿಕೆಯ ಮಟ್ಟ ಮತ್ತು ವೇಗಕ್ಕೆ ಅನುಗುಣವಾಗಿ ಅದನ್ನು ರೂಪಿಸಬೇಕು ಮತ್ತು ಅಳವಡಿಸಿಕೊಳ್ಳಬೇಕು.

## ನನ್ನ ಅನುಭವ

ನಾನು ತಾಳಿಕೋಟೆಯ ಬ್ರಿಲಿಯಂಟ್ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಕನ್ನಡವನ್ನು ಉಪನ್ಯಾಸ ವಿಧಾನದ ಮೂಲಕ ಬೋಧಿಸುತ್ತಿದ್ದೆ, ಅನಂತರ ಪ್ರಶ್ನೆಗಳಿಗೆ ಉತ್ತರಗಳನ್ನು ಮೌಖಿಕವಾಗಿಯೇ ಹೇಳುತ್ತಿದ್ದೆ ಮತ್ತು ಆಪಾಠದ ಬೋಧನೆಯನ್ನು ಮುಗಿಸುತ್ತಿದ್ದೆ. ಆದರೆ ನಾನು ಅಜೀಂಪ್ರೇಮ್‌ಜಿ ಶಾಲೆಯಲ್ಲಿ ಕೆಲಸ ಮಾಡಲು ಆರಂಭಿಸಿದ ಅನಂತರ ವಿದ್ಯಾರ್ಥಿಗಳಲ್ಲಿ ನಾಲ್ಕು ಪ್ರಮುಖ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವುದು ಅಗತ್ಯವೆಂದು ನಾನು ಅರಿತುಕೊಂಡೆ. ಅನಂತರ ಈ ನಿಟ್ಟಿನಲ್ಲಿ ನಾನು ಕೆಲಸ ಮಾಡಲು ಪ್ರಾರಂಭಿಸಿದಾಗ, ಬಹಳಷ್ಟು ಸಮಸ್ಯೆಗಳನ್ನು ಎದುರಿಸಿದೆ. ಆದರೆ ನಾನು ನನ್ನ ಈ ಪ್ರಯತ್ನದಲ್ಲಿ ಹಲವಾರು ಹೊಸ ವಿಷಯಗಳನ್ನು ಕಲಿಯುತ್ತಿದ್ದೆ, ಅದು ನನ್ನನ್ನು ಎಲ್ಲ ಸಮಸ್ಯೆಗಳ ಹೊರತಾಗಿಯೂ ಮುಂದುವರಿಯಲು ಪ್ರೇರೇಪಿಸಿತು.

## ಮಗುವಿನ ಕಲಿಕೆಯ ಮಟ್ಟದಿಂದ ಬೋಧನೆ

ನಾನು ಇಡೀ ತರಗತಿಯ ಎಲ್ಲ ವಿದ್ಯಾರ್ಥಿಗಳಿಗೆ ಅನ್ವಯವಾಗುವ ಒಂದೇ ಪಾಠ ಯೋಜನೆ (lesson plan) ಯೊಂದಿಗೆ ತರಗತಿಗೆ ಹೋದಾಗ ವಿವಿಧ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಕೆಲವು ಮಕ್ಕಳು ಬಹಳಷ್ಟು ತಂಟೆ ಮಾಡುತ್ತಿದ್ದರೆ, ಇತರ ಮಕ್ಕಳು ಯಾವುದೇ ಚಟುವಟಿಕೆಗಳಲ್ಲಿ

ಭಾಗವಹಿಸುತ್ತಿರಲಿಲ್ಲ. ಇದರಿಂದಾಗಿ ಉಳಿದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿತ್ತು. ಮಕ್ಕಳೊಂದಿಗಿನ ಮಾತುಕತೆಯ ಸಮಯದಲ್ಲಿ ಈ ಸಮಸ್ಯೆಗಳು ಬೆಳಕಿಗೆ ಬಂದಾಗ, ತರಗತಿಯಲ್ಲಿ ಪ್ರತಿ ಮಗುವಿನ ಕಲಿಕೆಯ ಮಟ್ಟವು ವಿಭಿನ್ನವಾಗಿದೆ ಎಂಬುದು ನನಗೆ ಅರಿವಾಯಿತು. ಹೀಗಾಗಿ ನಾನು ಪ್ರತಿ ಮಗುವಿನ ಕಲಿಕೆಯ ಮಟ್ಟ ಮತ್ತು ಅವರು ಕಲಿಯುವ ರೀತಿಯನ್ನು ಪರಿಶೀಲಿಸುವುದು ಅಗತ್ಯ ಎಂಬ ವಿಚಾರವನ್ನು ಅರ್ಥಮಾಡಿಕೊಂಡು ಕೆಲಸ ಮಾಡಲಾರಂಭಿಸಿದೆ. ಇದಕ್ಕಾಗಿ, ನಾನು ಮೊದಲು ಮಕ್ಕಳೊಂದಿಗೆ ನಿಕಟವಾಗಿ ತೊಡಗಿಸಿಕೊಂಡು, ಅವರಿಗೆ ಸರಿಹೊಂದುವ ವಿವಿಧ ಕೆಲಸಗಳನ್ನು ನೀಡಿದಾಗ (ಅವರ ಕಲಿಕೆಯ ಮಟ್ಟಕ್ಕೆ ಸೂಕ್ತವಾದ) ಅವರು ಅದನ್ನು ಪೂರ್ಣ ಆಸಕ್ತಿಯಿಂದ ಮಾಡುವುದನ್ನು ಗಮನಿಸಿದೆ. ಇದು ನನಗೆ ಅನೇಕ ವಿಷಯಗಳನ್ನು ಕಲಿಯುವಂತೆ ಮಾಡಿತು ಹೀಗಾಗಿ ಮಕ್ಕಳು ಅವರ ಕಲಿಕೆಯ ವೇಗ ಹಾಗೂ ಕಲಿಕಾ ಮಟ್ಟಕ್ಕೆ ಅನುಗುಣವಾಗಿ ಅಭ್ಯಸಿಸುವ ನಿಟ್ಟಿನಲ್ಲಿ ಸಹಾಯ ಮಾಡಲು ನಾವು ಪ್ರಯತ್ನಿಸಿದೆವು.

ಕಳೆದ ವರ್ಷದಿಂದ, ನಾವು ಕನ್ನಡದಲ್ಲಿ ಓದುವ ಮತ್ತು ಬರೆಯುವ ಕೌಶಲ್ಯಗಳನ್ನು ಕಲಿಸುವುದನ್ನು ಉಪಹಂತಗಳಾಗಿ ಮಾಡಿದ್ದೇವೆ ಮತ್ತು ನಾವು ಅವರಿಗೆ ಸೂಕ್ತವಾದ ಕಲಿಕಾ ಚಟುವಟಿಕೆಗಳು ಮತ್ತು ಕೆಲಸದ / ಅಭ್ಯಾಸದ ಹಾಳೆಗಳನ್ನು ಸಿದ್ಧಪಡಿಸಿದ್ದೇವೆ. ಅನಂತರ, ನಾವು ಮಕ್ಕಳನ್ನು ಅವರ ಕಲಿಕಾ ಸಾಮರ್ಥ್ಯಕ್ಕೆ ಅನುಗುಣವಾಗಿ ಮೌಲ್ಯಮಾಪನ ಮಾಡಿ, ಅವರ ಕಲಿಕೆಯ ಮಟ್ಟವನ್ನು ಗುರುತಿಸಿ, ಆ ಮಟ್ಟದಿಂದ ಕಲಿಸಲು ಪ್ರಾರಂಭಿಸಿದ್ದೇವೆ. ಮಕ್ಕಳು ನಿರಂತರವಾಗಿ ಕೆಲಸದಲ್ಲಿ ತೊಡಗಿರುವುದನ್ನು ನಾವು ಕಂಡುಕೊಂಡಿದ್ದೇವೆ. ಈ ಪ್ರಯೋಗದಿಂದ ನಾನು ಕೂಡ ಸಾಕಷ್ಟು ಕಲಿತಿದ್ದೇನೆ.

## ಕಲಿಕೆಯ ಹಂತಗಳನ್ನು ಸಿದ್ಧಪಡಿಸುವುದು

ಕರ್ನಾಟಕ ಸರ್ಕಾರವು ಪ್ರಕಟಿಸಿರುವ ಕಲಿಕಾ ಸಾಮರ್ಥ್ಯಗಳ ಕೈಪಿಡಿ ಮತ್ತು 1ನೇ ತರಗತಿಯಿಂದ 6ನೇ ತರಗತಿಯವರೆಗೆ ನಿಗದಿಪಡಿಸಿದ ಪಠ್ಯಪುಸ್ತಕಗಳನ್ನು ಪರಾಮರ್ಶಿಸಿ, ಓದುವ ಮತ್ತು ಬರೆಯುವ ಕೌಶಲ್ಯಗಳನ್ನು ಉಪಹಂತಗಳಾಗಿ ರಚಿಸಲಾಗಿದೆ.

ಓದುವ ಮತ್ತು ಬರೆಯುವ ಕೌಶಲ್ಯಕ್ಕಾಗಿ ಹಂತಗಳನ್ನು ಅಭಿವೃದ್ಧಿ ಪಡಿಸುವುದು ಸುಲಭ, ಆದರೆ ಆಲಿಸುವ ಮತ್ತು ಮಾತನಾಡುವ ಹಂತಗಳನ್ನು ಅಭಿವೃದ್ಧಿಪಡಿಸುವಾಗ ಹಲವು ಸಮಸ್ಯೆಗಳು ಎದುರಾದವು. ಈ ಸಮಸ್ಯೆಗಳಿಗೆ ಪರಿಹಾರ ಹುಡುಕಲು ನಾನು ನನ್ನ ಸಹೋದ್ಯೋಗಿಗಳೊಂದಿಗೆ ಚರ್ಚಿಸಿ, ಅವರ

ಸಲಹೆಗಳ ಪ್ರಕಾರ ಕ್ರಮಗಳನ್ನು ಸಿದ್ಧಪಡಿಸಿದೆ. ಆದರೆ ಈ ಹಂತಗಳನ್ನು ಸಿದ್ಧಪಡಿಸಿದ ಅನಂತರವೂ ತರಗತಿಯಲ್ಲಿ ಅದನ್ನು ಅಳವಡಿಸಿಕೊಳ್ಳುವಾಗ ನಾನು ಹಲವಾರು ಮಾರ್ಪಾಡುಗಳನ್ನು ಮಾಡಬೇಕಾಯಿತು.

ವರ್ಕ್‌ಶೀಟ್ / ಕೆಲಸದ ಹಾಳೆ / ಅಭ್ಯಾಸದ ಹಾಳೆಗಳನ್ನು ಸಿದ್ಧಪಡಿಸಲು ಹೆಚ್ಚು ಸಮಯ ಹಿಡಿಯಿತು. ಅನುಸರಿಸಬೇಕಾದ ಮಾರ್ಗವನ್ನು ಅಂತಿಮಗೊಳಿಸುವ ನಿಟ್ಟಿನಲ್ಲಿ, ಪ್ರತಿಯೊಂದು ಚಟುವಟಿಕೆಯನ್ನು ಪ್ರತಿ ಮಗುವನ್ನು ಮನಸ್ಸಿನಲ್ಲಿಟ್ಟುಕೊಂಡು ಅಂತಿಮಗೊಳಿಸಲಾಗಿದೆ ಮತ್ತು ನಮ್ಮ ಉದ್ದೇಶಗಳ ಈಡೇರಿಕೆ ಮತ್ತು ಮಗು ಅದರಲ್ಲಿ ತೊಡಗಿಕೊಂಡಾಗ ಅದಕ್ಕೆ ಉಂಟಾಗುವ ಸುಗಮತೆ ಮತ್ತು ಆಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ವರ್ಕ್‌ಶೀಟ್ / ಕೆಲಸದ ಹಾಳೆ/ಅಭ್ಯಾಸದ ಹಾಳೆಗಳನ್ನು ಸಿದ್ಧಪಡಿಸಲಾಗಿದೆ.

ಆರಂಭದಲ್ಲಿ ನಾವು ಪ್ರತಿ ಹಂತಕ್ಕೂ ಒಂದು ಅಥವಾ ಎರಡು ವರ್ಕ್‌ಶೀಟ್/ಕೆಲಸದ ಹಾಳೆ / ಅಭ್ಯಾಸದ ಹಾಳೆಗಳನ್ನು ಸಿದ್ಧಪಡಿಸಿದೆವು. ತರಗತಿಯಲ್ಲಿ ಕೆಲಸ ಮಾಡುವಾಗ ಇವುಗಳನ್ನು ಬದಲಾಯಿಸಲಾಯಿತು ಮತ್ತು ಕ್ರಮೇಣ ಇತರ ಹಲವು ವರ್ಕ್‌ಶೀಟ್/ಕೆಲಸದ ಹಾಳೆ/ಅಭ್ಯಾಸದ ಹಾಳೆಗಳನ್ನು ಸೇರಿಸಲಾಯಿತು.

## ಮಕ್ಕಳನ್ನು ಕಲಿಕೆಯಲ್ಲಿ ತೊಡಗಿಸುವುದು

ನಮ್ಮ ಯೋಜನೆಯ ಪ್ರಕಾರ ನಾವು ಮೊದಲು ಮಗುವಿನ ಆರಂಭಿಕ ಕಲಿಕಾ ಮಟ್ಟವನ್ನು (baseline) ಮೌಲ್ಯಮಾಪನ ಮಾಡಲು ನಿರ್ಧರಿಸಿದೆವು. ಹೀಗಾಗಿ ನಾನು 4, 5 ಮತ್ತು 6ನೇ ತರಗತಿಗಳಲ್ಲಿ ಓದುತ್ತಿರುವ ಮಕ್ಕಳ ಪ್ರಾರಂಭಿಕ ಕಲಿಕಾ ಹಂತಗಳನ್ನು ಅರ್ಥಮಾಡಿಕೊಳ್ಳಲು ನಾಲ್ಕರಿಂದ ಐದು ಕೆಲಸದ ಹಾಳೆ/ಅಭ್ಯಾಸದ ಹಾಳೆ/ವರ್ಕ್ ಶೀಟ್‌ಗಳನ್ನು ಸಿದ್ಧಪಡಿಸಿದೆ. ಈ ಕೆಲಸದ ಹಾಳೆ/ಅಭ್ಯಾಸದ ಹಾಳೆ/ವರ್ಕ್ ಶೀಟ್‌ಗಳು ಪ್ರತೀ ಹಂತಗಳಲ್ಲಿಯೂ ಮೌಲ್ಯಮಾಪನದ ಅಂಶಗಳನ್ನು ಒಳಗೊಂಡಿವೆಯೇ ಎಂಬುದನ್ನು ಖಚಿತಪಡಿಸಿಕೊಳ್ಳಲಾಯಿತು. ಈ ಪ್ರಯೋಗದಿಂದಾಗಿ, ಕೆಲವು ಮಕ್ಕಳ ಕಲಿಕೆಯ ಮಟ್ಟವು ಮೊದಲ ವರ್ಕ್‌ಶೀಟ್‌ನಲ್ಲಿ ಸ್ಪಷ್ಟವಾಯಿತು. ಆದರೆ ಇತರ ಕೆಲವು ಮಕ್ಕಳಿಗೆ ಎಲ್ಲ ಕೆಲಸದ ಹಾಳೆಗಳನ್ನು ಮತ್ತು ಉಕ್ತಲೇಖನಗಳನ್ನು ನೀಡಿ ಗಮನಿಸಬೇಕಾಯಿತು.

ಪ್ರತಿ ಮಗುವಿನ ಕಲಿಕೆಯ ಮಟ್ಟವನ್ನು ಅರ್ಥಮಾಡಿಕೊಂಡ ಅನಂತರ, ನಾವು ತರಗತಿಯಲ್ಲಿ ಅವರೊಂದಿಗೆ ತೊಡಗಿಸಿಕೊಂಡೆವು. ತರಗತಿಯಲ್ಲಿ ವಿವಿಧ ಚಟುವಟಿಕೆಗಳನ್ನು ನಡೆಸಲಾಯಿತು: ಎಲ್ಲ ಮಕ್ಕಳೊಂದಿಗೆ ಸೇರಿ ಮಾಡುವ

ಸಾಮೂಹಿಕ ಚಟುವಟಿಕೆಗಳು ಮತ್ತು ಪ್ರತಿ ಮಗುವಿನ ಕಲಿಕೆಯ ಮಟ್ಟದಿಂದ ಪ್ರಾರಂಭವಾಗುವ ವ್ಯಕ್ತಿಗತ ಚಟುವಟಿಕೆಗಳು. ಮಕ್ಕಳಿಗೆ ಅವರ ಕಲಿಕೆಯ ಮಟ್ಟಕ್ಕೆ ಸೂಕ್ತವಾದ ಚಟುವಟಿಕೆಗಳನ್ನು ನೀಡಿದಾಗ, ಅವರು ತತ್ಕ್ಷಣವೇ ತೀವ್ರ ಆಸಕ್ತಿಯಿಂದ ಅದರಲ್ಲಿ ತೊಡಗಿಸಿಕೊಳ್ಳುತ್ತಾರೆ. ನಾನು ಮಕ್ಕಳಿಗೆ ಪರಿಕಲ್ಪನೆಯನ್ನು ಪರಿಚಯಿಸುತ್ತಿದ್ದೆ, ಅನಂತರ ಅವರಿಗೆ ಅಭ್ಯಾಸ/ ಚಟುವಟಿಕೆಯನ್ನು ನೀಡುತ್ತಿದ್ದೆ ಮತ್ತು ಮುಂದಿನ ವಿದ್ಯಾರ್ಥಿಯತ್ತ ತೆರಳುತ್ತಿದ್ದೆ. ಮಕ್ಕಳು ತಮ್ಮ ಕೆಲಸದಲ್ಲಿ ನಿರಂತರವಾಗಿ ತೊಡಗಿಸಿಕೊಳ್ಳುತ್ತಿದ್ದರು. ಕೆಲವು ಮಕ್ಕಳು ಮಧ್ಯದಲ್ಲಿ ಸಹಾಯ ಬಯಸುತ್ತಿದ್ದರು. ಇದು ಮಕ್ಕಳನ್ನು ವಿವಿಧ ಗುಂಪು ಚಟುವಟಿಕೆಗಳಲ್ಲಿ ಮತ್ತು ವ್ಯಕ್ತಿಗತ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿತು ಮತ್ತು ಆಸಕ್ತಿ, ಉತ್ಸಾಹಪೂರಿತ ಭಾಗವಹಿಸುವಿಕೆ ಮತ್ತು ಉತ್ತಮ ಕಲಿಕಾ ಫಲಿತಾಂಶಗಳಿಗೂ ಸಾಕ್ಷಿಯಾಯಿತು.

**ಕೆಲವು ಉದಾಹರಣೆಗಳು**

4ನೇ ತರಗತಿಯಲ್ಲಿ, ವೀರಮಾತೆ ಜೀಜಾಬಾಯಿ ಅವರ ಪಾಠದ ನಿರೀಕ್ಷಿತ ಉದ್ದೇಶವೆಂದರೆ 'ಸೂಚನೆಗಳನ್ನು ಅನುಸರಿಸಿ ವಿರಾಮ ಚಿಹ್ನೆಗಳೊಂದಿಗೆ ಬರೆಯುವ ಸಾಮರ್ಥ್ಯವನ್ನು ಪಡೆಯುವುದು'. ವಿಭಿನ್ನ ಸಾಮರ್ಥ್ಯಗಳ ಕಾರಣದಿಂದಾಗಿ ಎಲ್ಲ ವಿದ್ಯಾರ್ಥಿಗಳಿಗೂ ಇದನ್ನು ನಿರ್ವಹಿಸಲು ಸಾಧ್ಯವಾಗಲಿಲ್ಲ. ಪ್ರತಿ ಮಗುವಿಗೂ ಪ್ರತ್ಯೇಕ ಪಾಠ ಯೋಜನೆ ಮತ್ತು ಚಟುವಟಿಕೆಗಳ ಅಗತ್ಯವಿದೆ ಎಂಬುದು ಇದರಿಂದ ತಿಳಿದು ಬರುತ್ತದೆ. ಆದ್ದರಿಂದ ಪ್ರತಿ ಪಾಠದಲ್ಲಿನ ಗುಂಪು ಚಟುವಟಿಕೆಯನ್ನು ಗುಂಪಿನಲ್ಲಿಯೇ ಮಾಡಲಾಯಿತು ಮತ್ತು ವೈಯಕ್ತಿಕ ವರ್ಕ್‌ಶೀಟ್ / ಕೆಲಸದ ಹಾಳೆ/ಅಭ್ಯಾಸದ ಹಾಳೆಯ ಚಟುವಟಿಕೆಗಳನ್ನುಪ್ರತೀ ಮಗುವಿನ ಕಲಿಕಾ ಮಟ್ಟವನ್ನು ಆಧರಿಸಿಯೇ ಮಾಡಲಾಯಿತು.

ನಾನು ತರಗತಿಯ ಎಲ್ಲ ಮಕ್ಕಳಿಗೆ ಏಕಕಾಲದಲ್ಲಿ ವೈಯಕ್ತಿಕ ಗಮನವನ್ನು ನೀಡಲು ಸಾಧ್ಯವಾಗುವುದಿಲ್ಲ, ಆದ್ದರಿಂದ ನಾನು ಕೆಲವು ತರಗತಿಗಳಲ್ಲಿಅವರಿಗೆ ಸಹಾಯ ಮಾಡುತ್ತೇನೆ. ನಾನು ಒಂದನೇ ತರಗತಿಯ ಮಕ್ಕಳಿಗೆ ಕಲಿಸಲು ಹಾಗೂ ಅವರನ್ನು ಮೌಲ್ಯಮಾಪನ ಮಾಡಲು 5ನೇ ತರಗತಿಯ ಮಕ್ಕಳ ಸಹಾಯವನ್ನು ಸಹ ತೆಗೆದುಕೊಂಡಿದ್ದೇನೆ. ತರಗತಿಯಲ್ಲಿ ಚಟುವಟಿಕೆಗಳು ಮತ್ತು ಮೌಲ್ಯಮಾಪನಗಳು ನಿರಂತರವಾಗಿ ನಡೆಯುತ್ತಿರಬೇಕು ಮತ್ತು ಫಲಿತಾಂಶಗಳನ್ನು ಪ್ರತಿದಿನ ಪಾಠದ ಕೊನೆಯಲ್ಲಿ ದಾಖಲಿಸಬೇಕು.

**ಮನೆಕೆಲಸ(homework)**

ಈ ಎಲ್ಲವುಗಳ ಹೊರತಾಗಿಯೂ ಕೆಲವು ಮಕ್ಕಳು ನೀಡಲಾದ ಮನೆಕೆಲಸವನ್ನು ಮಾಡುತ್ತಿರಲಿಲ್ಲ.ಇದರಿಂದಾಗಿ ನಾನು ಮಗುವಿನ ಕಲಿಕೆಯ ಮಟ್ಟಕ್ಕೆ ಸರಿಹೊಂದುವ ವಿವಿಧ ರೀತಿಯ ಮನೆಕೆಲಸವನ್ನು ನೀಡುವುದು ಉತ್ತಮ ಎಂದು ಅರಿತುಕೊಂಡೆ. ನಾನು ಅವರಿಗೆ ವರ್ಕ್‌ಶೀಟ್‌ಗಳು, ಸಾರಾಂಶೀಕರಿಸುವ ಕೆಲಸ, ಓದುವಿಕೆ, ವೀಕ್ಷಣೆ, ವಿಚಾರಣೆ ಇತ್ಯಾದಿಗಳ ರೂಪದಲ್ಲಿ ಮನೆಕೆಲಸವನ್ನು ನೀಡಿ, ಅದನ್ನು ಶನಿವಾರದಂದು ಚರ್ಚಿಸುತ್ತಿದ್ದೆ. ಇದನ್ನು ಪ್ರಾರಂಭಿಸಿದ ಅನಂತರ, ಸುಮಾರು ಶೇಕಡ 60ರಿಂದ 70ರಷ್ಟು ಮಕ್ಕಳು ತಮ್ಮ ಮನೆಕೆಲಸವನ್ನು ಸಮಯಕ್ಕೆ ಸರಿಯಾಗಿ ಪೂರ್ಣಗೊಳಿಸಿದರು.

**ಈ ಬದಲಾವಣೆಗಳ ಪ್ರಯೋಜನಗಳು**

- ಮಕ್ಕಳು ನಿರಂತರವಾಗಿ ಅಭ್ಯಾಸದಲ್ಲಿ ತೊಡಗಿದ್ದರು.
- ಪ್ರತಿಯೊಂದು ಹಂತವೂ ಹೊಸ ವಿಧಾನಗಳು ಮತ್ತು ಕೆಲಸದ ಹಾಳೆ/ವರ್ಕ್‌ಶೀಟ್‌ಗಳನ್ನು ಹೊಂದಿದ್ದರಿಂದ ಮಕ್ಕಳು ಹೆಚ್ಚಿನ ಆಸಕ್ತಿಯಿಂದ ಅಭ್ಯಾಸ ಮಾಡುವಂತೆ ಮಾಡಿತು.
- ಕಲಿಕೆಯು ಮಕ್ಕಳ ಕಲಿಕೆಯ ಹಂತಗಳಿಗೆ ಅನುಗುಣವಾಗಿ ನಡೆಯುತ್ತಿದ್ದರಿಂದ ಕಲಿಕೆಯ ವೇಗವು ಸ್ವಲ್ಪ ಹೆಚ್ಚಾಗಿತ್ತು.
- ಇದು ಮಕ್ಕಳ ಕೇಂದ್ರಿತ ವಿಧಾನವಾಗಿದ್ದು, ಮಕ್ಕಳ ಆಸಕ್ತಿಯಿಂದ ಚಾಲಿತಗೊಳ್ಳುತ್ತದೆ.
- ಇದರಿಂದಾಗಿ ಮಕ್ಕಳ ಕಲಿಕೆಯನ್ನು ನಿರ್ಣಯಿಸುವುದು ಮತ್ತು ದಾಖಲಿಸುವುದು ಸುಲಭ.
- ಇದು ಪ್ರತಿ ಮಗುವಿಗೆ ವೈಯಕ್ತಿಕ ಗಮನವನ್ನು ನೀಡುವಂತೆ ಪ್ರೋತ್ಸಾಹಿಸಿತು.
- ಇದರಿಂದಾಗಿ ನನಗೆ ನಿರಂತರವಾಗಿ ಸಕ್ರಿಯವಾಗಿರಲು ಪ್ರೋತ್ಸಾಹ ಸಿಗುತ್ತಿದೆ ಮತ್ತು ನಾನು ಪ್ರತಿದಿನವೂ ಹೊಸ ವಿಷಯಗಳನ್ನು ಕಲಿಯುತ್ತಿದ್ದೇನೆ.

**ಈ ವಿಧಾನದಲ್ಲಿ ನಾನು ಎದುರಿಸಿದ ಸಮಸ್ಯೆಗಳು**

- ಇಲ್ಲಿ ನನಗೆ ಹೆಚ್ಚಿನ ಸಮಯ ಬೇಕಾಗುತ್ತದೆ
- ಎಲ್ಲಾ ವರ್ಕ್‌ಶೀಟ್‌ಗಳನ್ನು ನಾನೇ ಸಿದ್ಧಪಡಿಸ-ಬೇಕಾಗಿರುವುದರಿಂದ ಇದು ಹೆಚ್ಚುವರಿ ಕೆಲಸವಾಗುತ್ತದೆ.
- ವರ್ಕ್‌ಶೀಟ್‌ಗಳು ಕೆಲವೊಮ್ಮೆ ಉದ್ದೇಶಿತ ಉದ್ದೇಶವನ್ನು ಪೂರೈಸುವುದಿಲ್ಲ.

## ಮಕ್ಕಳ ಕಲಿಕೆಯ ಮಟ್ಟಗಳು

ಈ ಹಂತಗಳನ್ನು 1ರಿಂದ 6ನೇ ತರಗತಿಯ ಮಕ್ಕಳ ಸಾಮರ್ಥ್ಯಗಳನ್ನು ಒಳಗೊಳ್ಳುವಂತೆ ವಿನ್ಯಾಸಗೊಳಿಸಲಾಗಿದೆ. ಅವು ಆರೋಹಣ ಕ್ರಮದಲ್ಲಿವೆ, ಇದು ಮಗುವಿನ ಕಲಿಕೆಯನ್ನು ನಿರಂತರವಾಗಿ ಮೌಲ್ಯಮಾಪನ ಮಾಡುತ್ತದೆ ಮತ್ತು ಮುಂದಿನ ಹಂತದ ಕಲಿಕೆಗೆ ಮಾರ್ಗದರ್ಶನವನ್ನು ಸುಗಮಗೊಳಿಸುತ್ತದೆ. ಇಲ್ಲಿ, ನಾನು 4 ಹಂತಗಳು ಮತ್ತು ಉಪ-ಹಂತಗಳನ್ನು ರೂಪಿಸಿ, ಪ್ರತಿ ಹಂತಕ್ಕೂ ಚಟುವಟಿಕೆಗಳನ್ನು ಸೂಚಿಸಿದ್ದೇನೆ.

### ಹಂತ 1: ಬರವಣಿಗೆ - ಅಚ್ಚುಕಟ್ಟಾದಮತ್ತುಸ್ಪಷ್ಟವಾದಬರವಣಿಗೆ

1. ಸರಳಪದ
2. ಕಾಗುಣಿತ
3. ಒತ್ತಕ್ಷರ
    a. ಎ.ಸಜಾತೀಯ ವ್ಯಂಜನ ಒತ್ತಕ್ಷರ
    b. ಬಿ. ವಿಜಾತೀಯ ವ್ಯಂಜನ ಒತ್ತಕ್ಷರ
    c. ಸಿ. ಮಿಶ್ರ ವ್ಯಂಜನ ಒತ್ತಕ್ಷರ
4. ವಾಕ್ಯರಚನೆ
2. ಎ. ಸರಳವಾಕ್ಯರಚನೆ
3. ಬಿ. ಸಂಯುಕ್ತವಾಕ್ಯರಚನೆ
4. ಅಚ್ಚುಕಟ್ಟಾದ ಮತ್ತು ಸ್ಪಷ್ಟವಾದ ಬರವಣಿಗೆ
5. ಕ್ರಮಬದ್ಧಬರವಣಿಗೆ
6. ಸರ್ವೇಸಾಮಾನ್ಯವಾಗಿ ಬಳಸುವ ವಿರಾಮ ಚಿಹ್ನೆಗಳನ್ನು ಬಳಸಿಕೊಂಡು ಉಕ್ತಲೇಖನ(dictation)ವನ್ನು ಬರೆಯುವುದು.
7. ಕೇಳಿದ ಅಥವಾ ಓದಿದ ವಿಷಯಗಳ ಬಗ್ಗೆ ಸೂಕ್ತವಾದ ವಿರಾಮ ಚಿಹ್ನೆಗಳನ್ನು ಬಳಸಿ ಅರ್ಥಪೂರ್ಣವಾಕ್ಯಗಳನ್ನು ಬರೆಯುವುದು

### ಹಂತ 2: ಪ್ರಶ್ನೆ ಮತ್ತು ಉತ್ತರಗಳನ್ನು ಬರೆಯುವುದು

1. ಭಾಷಾಕಲಿಕೆ
2. ಉಕ್ತಲೇಖನಗಳನ್ನು ಬರೆಯುವುದು
3. ಹೊಂದಿಸಿ ಬರೆಯುವುದು

**ಹಂತ 3: ಸೂಚಿಸಿದಂತೆಬರೆಯುವುದು**

1. ಭಾಷೆಯ ನಿಯಮಗಳನ್ನು (ವ್ಯಾಕರಣ ಸಂಬಂಧಿತ) ಗ್ರಹಿಸುವ ಮೂಲಕ ಸರಳ, ಕ್ರಿಯಾತ್ಮಕ ವಾಕ್ಯಗಳನ್ನು (ಕೊಟ್ಟಿರುವ ಮಾಹಿತಿಯ ಆಧಾರದ ಮೇಲೆ) ರಚಿಸುವುದು
2. ಕ್ರಮಬದ್ಧ ಬರವಣಿಗೆ
3. ಪ್ರವಾಸ ಅಥವಾ ವಿಶೇಷ ದಿನದ ಆಚರಣೆಯನ್ನು ಕುರಿತು ವರದಿಯೊಂದನ್ನು ಬರೆಯುವುದು
4. ಸ್ವಂತ ವಾಕ್ಯಗಳಲ್ಲಿ ನುಡಿಗಟ್ಟು, ಪದಗುಚ್ಛ ಮತ್ತು ಗಾದೆಗಳನ್ನು ಬಳಸುವುದು

**ಹಂತ 4: ಸ್ವತಂತ್ರ/ಸೃಷ್ಟ್ಯಾತ್ಮಕ ಬರವಣಿಗೆಯಲ್ಲಿ ತೊಡಗಿಕೊಳ್ಳುವುದು**

1. ಸ್ವತಂತ್ರವಾಗಿ ಅನೌಪಚಾರಿಕ ಪತ್ರಗಳು, ಔಪಚಾರಿಕ ಪತ್ರಗಳು, ಪ್ರವಾಸ ಲೇಖನಗಳು ಮತ್ತು ಕಿರು ಪ್ರಬಂಧಗಳನ್ನು ಬರೆಯುವುದು.
2. ಪಾಠದಲ್ಲಿ ಹೇಳಿರುವ ವಿಷಯಗಳನ್ನು ಕಥೆ, ಸಂಭಾಷಣೆಗಳು ಅಥವಾ ಸಾರಾಂಶ ರೂಪದಲ್ಲಿ ಬರೆಯುವುದು
3. ನಮ್ಮ ಪುಸ್ತಕ
4. ಕಿರು ಟಿಪ್ಪಣಿ
5. ಸ್ವತಂತ್ರವಾಗಿ ಕಥೆ ಬರೆಯುವುದು
6. ಕವನಗಳನ್ನು ಬರೆಯುವುದು
7. ಚಿತ್ರವನ್ನು ನೋಡಿ ಅದರ ಕುರಿತು ಬರೆಯುವುದು
8. ಮಾತನಾಡುವ ಭಾಷೆಯನ್ನು (ಆಡುಮಾತನ್ನು) ಲಿಖಿತಭಾಷೆಗೆ ಪರಿವರ್ತಿಸುವುದು

ನನ್ನ ತರಗತಿಯಲ್ಲಿ ಈ ಹಂತಗಳನ್ನು ಅನುಸರಿಸಿದ ಅನಂತರ, ಚಟುವಟಿಕೆ ಆಧಾರಿತ ಅಭ್ಯಾಸಗಳು ಮತ್ತು ಕೆಲಸದ ಹಾಳೆಗಳನ್ನು ಸಿದ್ಧಪಡಿಸುವಾಗ, ಹಾಗೂ ನಾನು ಎದುರಿಸಿದ ಸಮಸ್ಯೆಗಳಿಂದಲೂ ನಾನು ಅನೇಕ ವಿಷಯಗಳನ್ನು ಕಲಿತಿದ್ದೇನೆ. ಈ ಅನುಭವಗಳ ಆಧಾರದ ಮೇಲೆ ನಾನು ನನ್ನ ಮುಂದಿನ ಪಾಠ ಯೋಜನೆಗಳನ್ನು ಸಿದ್ಧಪಡಿಸಿದೆ.

ಪ್ರಸ್ತುತ**, ರಮೇಶ್** ಅವರು ಕರ್ನಾಟಕದ ಯಾದಗಿರಿಯಲ್ಲಿನ ಅಜೀಮ್ ಪ್ರೇಮ್‌ಜಿ ಶಾಲೆಯಲ್ಲಿ ಕನ್ನಡದ ಉಪಾಧ್ಯಾಯರಾಗಿದ್ದಾರೆ. ಇದಕ್ಕೆ ಮೊದಲು, ಮಾರನಾಳ ತಾಂಡಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮತ್ತು ತಾಳಿಕೋಟೆಯ ಬ್ರಿಲಿಯಂಟ್ ಶಾಲೆಯಲ್ಲಿ ಅಧ್ಯಾಪನವನ್ನು ನಡೆಸಿದ್ದರು. ಹಾಡುಗಾರಿಕೆ ಹಾಗೂ ಮಕ್ಕಳನ್ನು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ತರಬೇತುಗೊಳಿಸುವುದರಲ್ಲಿ ಇವರು ಆಸಕ್ತರು. ಇವರ ಸಂಪರ್ಕ: ramesh.rathod@azimpremjifoundation.org